## ಎಲ್ಲೆಡೆಯೂ ಭಗವಂತನ ರೂಪ

ಅಧ್ಯಾಯ - ೯೦

**ಆದ್ಯಂ ಹಿ ಮತ್ಸ್ಯರೂಪಂ ಮೇ ಸಂಸ್ಥಿತಂ ಮಾನಸೇ ಹ್ರದೇ।**
**ಸರ್ವ ಪಾಪ ಕ್ಷಯಕರಂ ಕೀರ್ತನ ಸ್ಪರ್ಶನಾದಿಭಿಃ ॥**

ಭಗವಂತನು ಹೇಳುತ್ತಾನೆ :- ಮಾನಸ ಹ್ರದ ಎಂಬ ತೀರ್ಥದಲ್ಲಿ ನನ್ನ ಮೊದಲನೇಯ ಮತ್ಸ್ಯರೂಪವು ಸಾನ್ನಿಧ್ಯವನ್ನು ಹೊಂದಿದೆ. ಆದುದರಿಂದ ಆ ತೀರ್ಥದ ಸ್ನಾನ ದರ್ಶನಸ್ಪರ್ಶನಾದಿ ಗಳೆಲ್ಲವೂ ಪಾಪನಾಶಕವಾಗಿವೆ. ಇದರಂತೆಯೇ ನನ್ನ ಕೂರ್ಮ ರೂಪವು ಕೌಶಿಕಿ ನದಿಯಲ್ಲಿ ಸನ್ನಿಹಿತವಾಗಿದೆ. ಕೃಷ್ಣಾ ನದಿಯಲ್ಲಿ ಹಯಗ್ರೀವ ಎಂಬ ನನ್ನ ರೂಪವಿದೆ. ಹಸ್ತಿನಾವತಿಯಲ್ಲಿ ಗೋವಿಂದ ಎಂಬ ನನ್ನ ರೂಪ ಸನ್ನಿಧಾನವಿದೆ.

ಕಾಲಿಂದಿ ಅರ್ಥಾತ ಯಮುನಾ ನದಿಯಲ್ಲಿ ತ್ರಿವಿಕ್ರಮ ರೂಪವು ಲಿಂಗಭೇದ ತೀರ್ಥದಲ್ಲಿ ಭವ ಎಂಬ ನನ್ನ ಅಂಶವುಳ್ಳ ಸಾನ್ನಿಧ್ಯವಿದೆ. ಕೇದಾರದಲ್ಲಿ ಹರಿಹರ ರೂಪವು ಕುಬ್ಜಾಮ್ರದಲ್ಲಿ ಕೃಷ್ಣ ಬಲರಾಮರೂಪವು ಹೊಂದಿವೆ. ಬದರೀಕ್ಷೇತ್ರದಲ್ಲಿ ನಾನು ನಾರಾಯಣನಾಗಿಯೂ, ವರಾಹ ಕ್ಷೇತ್ರದಲ್ಲಿ ಗರುಡಧ್ವಜನಾಗಿ ಭದ್ರಕರ್ಣದಲ್ಲಿ ಜೀವೇಶನಾಗಿ, ಕುರುಕ್ಷೇತ್ರದಲ್ಲಿ ಕುರುಧ್ವಜನಾಗಿ ಕೃತಶೌಚವೆಂಬ ಕ್ಷೇತ್ರದಲ್ಲಿ ನೃಸಿಂಹನಾಗಿ, ಗೋಕರ್ಣದಲ್ಲಿ ವಿಶ್ವಧಾರಣನಾಗಿ ನಾನು ವಿಶೇಷ ಸಾನ್ನಿಧ್ಯದಿಂದ ವಾಸವಮಾಡುತ್ತಿರುವೆನು. ಪಯೋಷ್ಣೀ ನದಿಯಲ್ಲಿ ಇರುವ ನನಗೆ ಅಖಂಡನೆಂದು ಎನ್ನುವರು. ಮಣಿಮತೀ ಹೃದಯದಲ್ಲಿ ನಾನು ಶಂಭು ರೂಪದಿಂದಿರುವೆನು.

ಹಿಮವತ್ ಪರ್ವತದಲ್ಲಿ ಶೂಲಬಾಹು ರೂಪದಿಂದಿರುವೆನು. ನೈಮಿಷ ಕ್ಷೇತ್ರದಲ್ಲಿ ಪೀತವಸ್ತ್ರವೆಂದೂ, ಗಯಾಕ್ಷೇತ್ರದಲ್ಲಿ ಗದಾಧರ, ಕುಶೇಶಯ ಮೊದಲಾದ ರೂಪವದನೆಂದೂ ನಾನೇ ಕರೆಯಲ್ಪಡುವೆನು. ಕಶೇರು ದೇಶದಲ್ಲಿ ನನಗೆ ದೇವೇಶಿವೆನ್ನುವರು, ಮಲಯ ಪರ್ವತದಲ್ಲಿ ಸೌಗಂಧಿ ಎನ್ನುವರು.

ಅವಂತೀ ದೇಶದಲ್ಲಿ ಧೀಷ್ಣನೆಂದೂ ಕರೆಯುವರು. ಪಾಂಚಾಲ ದೇಶದಲ್ಲಿ ಪಾಂಚಾಲಿಕನೆಂಬ ಹೆಸರು ನನಗಿದೆ. ಪಂಪಾ ಕ್ಷೇತ್ರದಲ್ಲಿ ಪದ್ಮ ಕಿರಣನೆಂದೂ, ಕುರುಜಾಂಗಲದಲ್ಲಿ ಸ್ಥಾಣುವೆಂದೂ, ಸುಕರಪರ್ವತದಲ್ಲಿ ತ್ರಿನಾಚಿಕೇತನೆಂದೂ ನನಗೆ ಹೆಸರು ಇರುವದು. ಮಹಾ ಪ್ರಳಯದಲ್ಲಿ ನಾನೇ ರುದ್ರರೂಪವನ್ನು ಧರಿಸುವೆನು. ಸಪ್ತ ಗೋದಾವರೀ ಕ್ಷೇತ್ರದಲ್ಲಿ ನಾನು ಹಾಟಿಕೇಶ್ವರನ ರೂಪದಲ್ಲಿರುವೆನು.

ಮಗಧೆಯಲ್ಲಿ ಸುಧಾಪತಿಯ ರೂಪದಿಂದ ನಾನು ನೆಲೆಸಿರುವೆನು. ತ್ರಿಕೂಟ ಶಿಖರದಲ್ಲಿ ಚಕ್ರಪಾಣಿಯಾದ ಈಶ್ವರನ ರೂಪವು ನನದೇ ಆಗಿದೆ. ಸುತವೆಂಬ ಲೋಕದಲ್ಲಿ ಸ್ಥಿರವಾದ ಕೂರ್ಮ ರೂಪದಿಂದ ನಾನು ಇದ್ದುಕೊಂಡು ವಿತಲದಲ್ಲಿ ಮಾತ್ರ ಪಂಕಜಾನನ ರೂಪದಿಂದ ವಾಸಿಸಿರುವೆನು. ಮಹಾತಲದಲ್ಲಿ ಗುರು ಹಾಗೂ ಸಹಸ್ರಭುಜ ಪಾತಾಳದಲ್ಲಿ ಯೋಗೀಶ, ರೂಪಗಳನ್ನು ಧರಿಸಿ ನಾನು ನನ್ನ ವಿಶೇಷ ಸಾನ್ನಿಧ್ಯದಿಂದಿರುವೆನು. ಭುವರ್ಲೋಕದಲ್ಲಿ ಗರುಡ ರೂಪದಿಂದ, ಸ್ವರ್ಲೋಕದಲ್ಲಿ ವಿಷ್ಣು ರೂಪದಿಂದ ಮರ್ಹಲೋಕದಲ್ಲಿ ಅಗಸ್ತ್ಯ ರೂಪದಿಂದ ಜನಲೋಕದಲ್ಲಿ